Regulations of Service Personnel in UAS, Bangalore is deleted from the date of publication in the Karnataka Gazette.

BY ORDER

P.D. 106 REGISTRAR.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಪಂಚಾಯತಿ ಸದಸ್ಯರಾದ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ರವರ ತಾಲ್ಲೂಕು ಪಂಚಾಯತಿ ಸದಸ್ಯತ್ವವನ್ನು ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ: ರಾಚುಆ 60(26) ಟಿಜಡ್‌ಪಿ 2007, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2007**

ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ 11-ಚೇರ್ಕಾಡಿ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (ಇನ್ನು ಮುಂದೆ ಸದರಿ ಅಧಿನಿಯಮ ಎಂದು ಹೇಳಲಾಗುವುದು)ರ ಪ್ರಕರಣ 308-ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005 (ಇನ್ನು ಮುಂದೆ ಸದ್ರಿ ಆದೇಶ ಎಂದು ಹೇಳಲಾಗುವುದು) ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರಗಳನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು ಉಡುಪಿ ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಸದರಿ ಅಧಿನಿಯಮದ ಪ್ರಕರಣ 308-ಸಿ ಹಾಗೂ ಸದರಿ ಆದೇಶದ ಖಂಡ 6 ರ ಉಪಖಂಡ (5)ರನ್ವಯ ದಿ: 6.4.2006 ರಂದು ನೋಟೀಸನ್ನು ಸದ್ರಿ ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ರವರಿಗೆ ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ ಹಾಗೂ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಸದರಿ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ಇವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದರಿಂದ ಹಾಗೂ ಈ ರೀತಿ ಲೆಕ್ಕಪತ್ರಗಳನ್ನು ಸಲ್ಲಿಸಲು ವಿಫಲರಾಗಿರುವುದಕ್ಕೆ ಯಾವುದೇ ಕಾರಣ ಅಥವಾ ಸಮರ್ಥನೆಗಳನ್ನು ನೀಡದಿರುವುದರಿಂದಾಗಿ ರಾಜ್ಯ ಚುನಾವಣಾ ಆಯೋಗವು ಆದೇಶ ಸಂ. ರಾಚುಆ 60(26) ಟಿಜಡ್‌ಪಿ 2007 ದಿನಾಂಕ: 7.4.2007ರನ್ವಯ ಸದರಿ ಅಧಿನಿಯಮದ ಪ್ರಕರಣ 308-ಸಿ ಇದರಡಿ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿತು.

ದಿ:28.04.2007 ರಂದು ಉಡುಪಿ ಜಿಲ್ಲಾಧಿಕಾರಿಗಳು ಚುನಾವಣಾ ಆಯೋಗಕ್ಕೆ ಪತ್ರವೊಂದನ್ನು ಬರೆದು ಉಡುಪಿ ತಾಲ್ಲೂಕು, ಚೇರ್ಕಾಡಿ ಚುನಾವಣಾ ಕ್ಷೇತ್ರಕ್ಕೆ ಸ್ಪರ್ಧಿಸಿದ್ದ ಇಬ್ಬರು ಅಭ್ಯರ್ಥಿಗಳ ಹೆಸರೂ ಉಮೇಶ ನಾಯ್ಕ ಎಂಬುದಾಗಿದ್ದು ಅವರ ವಿಳಾಸಗಳು ಈ ಕೆಳಕಂಡಂತೆ ಬೇರೆ ಬೇರೆಯಾಗಿದೆಯೆಂದು ವರದಿ ಮಾಡಿದ್ದಾರೆ.

1) ಶ್ರೀ ಮುಂಡ್ಕಿನಜೆಡ್ಡು ಉಮೇಶ 'ಎ' ನಾಯ್ಕ "ನನಸು" ಮುಂಡ್ಕಿನಜೆಡ್ಡು ಮನೆ ಚೇರ್ಕಾಡಿ ಗ್ರಾಮ ಉಡುಪಿ ತಾಲ್ಲೂಕು.

2) ಶ್ರೀ ಉಮೇಶ ನಾಯ್ಕ ಅಮ್ಮುಂಜೆ, ದ್ಯಾಂಗಾಲು, ಕೆಂಜೂರು ಗ್ರಾಮ, ಉಡುಪಿ ತಾಲ್ಲೂಕು.

ರಾಜ್ಯ ಚುನಾವಣಾ ಆಯೋಗವು ಈಗಾಗಲೇ ಅನರ್ಹಗೊಳಿಸಿರುವ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ಇವರು ಲೆಕ್ಕಪತ್ರಗಳನ್ನು ಸಲ್ಲಿಸಿದ್ದಾರೆ ಹಾಗೂ ಶ್ರೀ ಉಮೇಶ ನಾಯ್ಕ , ಅಮ್ಮುಂಜೆ ಎಂಬುವವರು ಲೆಕ್ಕಪತ್ರಗಳನ್ನು ಸಲ್ಲಿಸಿಲ್ಲ. ಆದರೆ 11-ಚೇರ್ಕಾಡಿ ತಾಲ್ಲೂಕು ಪಂಚಾಯತ್ ಕ್ಷೇತ್ರದ ಚುನಾವಣಾಧಿಕಾರಿಗಳು ಆ ಕ್ಷೇತ್ರದಲ್ಲಿ ಸ್ಪರ್ಧಿಸಿದ ಅಭ್ಯರ್ಥಿಗಳ ಲೆಕ್ಕ ವಿವರ ಸಲ್ಲಿಸುವಾಗ ಶ್ರೀ ಉಮೇಶ ನಾಯ್ಕ ಅಮ್ಮುಂಜೆ ದ್ಯಾಂಗಾಲು ಕೆಂಜೂರು ಗ್ರಾಮ ಇವರು ವೆಚ್ಚ ವಿವರಗಳನ್ನು ಸಲ್ಲಿಸಿರುವುದಿಲ್ಲ ಎಂದು ವರದಿ ಮಾಡುವ ಬದಲು ಕೈ ತಪ್ಪಿನಿಂದ ವೆಚ್ಚ ವಿವರ ಸಲ್ಲಿಸಿದ್ದ ಶ್ರೀ ಮುಂಡ್ಕಿನಚಿಡ್ಡು ಉಮೇಶ ಎ. ನಾಯ್ಕ ಇವರು ವೆಚ್ಚ ವಿವರ ಸಲ್ಲಿಸಿರುವುದಿಲ್ಲವೆಂದು ವರದಿ ಮಾಡಿದ್ದು ಜಿಲ್ಲಾಧಿಕಾರಿಗಳ ಕಛೇರಿಯೂ ಕೂಡ ಅದೇ ವರದಿಯನ್ನು ಆಯೋಗಕ್ಕೆ ಕಳುಹಿಸಿದೆ. ಅದರನ್ವಯ ಚುನಾವಣಾ ಆಯೋಗವು ಅವರನ್ನು ಅನರ್ಹಗೊಳಿಸಿದೆ ಹಾಗೂ ಈ ಆದೇಶವನ್ನು ಮಾರ್ಪಾಡು ಮಾಡಬೇಕೆಂದು ಜಿಲ್ಲಾಧಿಕಾರಿಗಳು ಕೋರಿದ್ದಾರೆ. ಚುನಾವಣಾ ಆಯೋಗವು ಶ್ರೀ ಉಮೇಶ್ ಎ. ನಾಯ್ಕ ಮುಂಡ್ಕಿನಜೆಡ್ಡು ಇವರನ್ನು ಜಿಲ್ಲಾಧಿಕಾರಿಗಳ ವರದಿಯ ಆಧಾರದ ಮೇಲೆ ಅನರ್ಹಗೊಳಿಸುವ ಪೂರ್ವದಲ್ಲಿ ಅವರಿಗೆ ನೋಟೀಸನ್ನು ಕಳುಹಿಸಿತ್ತು. ಆ ನೋಟೀಸನ್ನು ಅವರ ಪರವಾಗಿ ಶ್ರೀಮತಿ ನಾಗವೇಣಿ ಎನ್ನುವವರು ಪಡೆದಿರುತ್ತಾರೆ. ಆದಾಗ್ಯೂ ಸದ್ರೀ ಶ್ರೀ ಉಮೇಶ ಎ. ನಾಯ್ಕ ಇವರು ಲೆಕ್ಕಪತ್ರಗಳನ್ನು ಈಗಾಗಲೇ ಸಲ್ಲಿಸಿರುವುದರ ಬಗ್ಗೆ ಮಾಹಿತಿಯನ್ನು ಚುನಾವಣಾ ಆಯೋಗಕ್ಕೆ ಸಲ್ಲಿಸಿರುವುದಿಲ್ಲ.

ಸಂಬಂಧಪಟ್ಟ ಚುನಾವಣಾಧಿಕಾರಿಗಳು ಮಾಡಿರುವ ಪ್ರಮಾದದಿಂದಾಗಿ ಮತ್ತು ಜಿಲ್ಲಾಧಿಕಾರಿಗಳು ಹಾಗೂ ಸಂಬಂಧಪಟ್ಟ ತಹಶೀಲ್ದಾರರು ಚುನಾವಣಾಧಿಕಾರಿಗಳ ವರದಿಯನ್ನು ಪರಿಶೀಲಿಸದೇ ರಾಜ್ಯ ಚುನಾವಣಾ ಆಯೋಗಕ್ಕೆ ತಪ್ಪು ಮಾಹಿತಿ ನೀಡಿರುವುದರಿಂದಾಗಿ ಹಾಗೂ ಶ್ರೀ ಉಮೇಶ ಎ. ನಾಯ್ಕ, ಮುಂಡ್ಕಿನಜೆಡ್ಡು ಇವರು ಆಯೋಗವು ಕಳುಹಿಸಿದ ನೋಟೀಸಿಗೆ ಯಾವುದೇ ಉತ್ತರವನ್ನು ನೀಡದೇ ಹೋದ ಕಾರಣ ಇವರನ್ನು ಅನರ್ಹಗೊಳಿಸುವ ಆದೇಶವನ್ನು ಚುನಾವಣಾ ಆಯೋಗವು ಮಾಡುವ ಸನ್ನಿವೇಶ

ಉಂಟಾಯಿತು. ಶ್ರೀ ಉಮೇಶ ಎ. ನಾಯ್ಕ, ಮುಂಡ್ಕಿನಜೆಡ್ಡು ಇವರು ಲೆಕ್ಕಪತ್ರಗಳನ್ನು ಈಗಾಗಲೇ ಕೊಟ್ಟಿರುವುದರಿಂದ ಅವರನ್ನು ಸದರಿ ಅಧಿನಿಯಮದ ಪ್ರಕರಣ 308-ಸಿ ರಡಿ ಅನರ್ಹಗೊಳಿಸಲು ಬರಲಾರದು. ಸಂಬಂಧಪಟ್ಟ ಚುನಾವಣಾಧಿಕಾರಿಗಳು ಮಾಡಿದ ಪ್ರಮಾದ ಹಾಗೂ ತಪ್ಪು ಮಾಹಿತಿಯಿಂದಾಗಿ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ಇವರನ್ನು ಅನರ್ಹಗೊಳಿಸುವ ಆದೇಶ ಮಾಡಿದ್ದರಿಂದ, ಈ ಆದೇಶವು ಪ್ರಾರಂಭದಿಂದಲೇ ಶೂನ್ಯವಾದ (ab initio void) ಆದೇಶವಾಗಿರುತ್ತದೆ. ರಿಟ್ ಅರ್ಜಿ ಸಂಖ್ಯೆ: 9421/2007ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ಇಂತಹುದೇ ಪ್ರಕರಣದಲ್ಲಿ ಮರು ಪರಿಶೀಲಿಸಲು ಆದೇಶಿಸಿದ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲೂ ಸಹ ಈಗಾಗಲೇ ಮಾಡಿದ ಆದೇಶವನ್ನು ಪುನರ್ ಪರಿಶೀಲಿಸಲಾಗಿದೆ.

ಮೇಲೆ ವಿವರಿಸಿದ ಕಾರಣಗಳಿಂದ ಶ್ರೀ ಮುಂಡ್ಕಿನಜೆಡ್ಡು ಉಮೇಶ ಎ. ನಾಯ್ಕ ರವರನ್ನು ಆದೇಶ ಸಂಖ್ಯೆ: ರಾಚುಆ 60(26) ಟಿಝಡ್‌ಪಿ 2007 ದಿನಾಂಕ: 6.4.2007 ರಲ್ಲಿ ಅನರ್ಹಗೊಳಿಸಿರುವ ಆದೇಶವನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

ಆಯುಕ್ತರು,

ಪಿ.ಆರ್. 1155 ರಾಜ್ಯ ಚುನಾವಣಾ ಆಯೋಗ.

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಪಂಚಾಯತಿ ಸದಸ್ಯರಾದ ಶ್ರೀಮತಿ ಜಯಮ್ಮ ರವರ ತಾಲ್ಲೂಕು ಪಂಚಾಯತಿ ಸದಸ್ಯತ್ವವನ್ನು ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ: ರಾಚುಆ 57(2) ಟಿಜಡ್‌ಪಿ 2007, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2007**

ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಯಡೇಹಳ್ಳಿ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀಮತಿ ಜಯಮ್ಮ ಕೋಂ ಸಂಗನಾಥ ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (ಇನ್ನು ಮುಂದೆ ಸದರಿ ಅಧಿನಿಯಮ ಎಂದು ಹೇಳಲಾಗುವುದು)ರ ಪ್ರಕರಣ 308-ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005 (ಇನ್ನು ಮುಂದೆ ಸದ್ರಿ ಆದೇಶ ಎಂದು ಹೇಳಲಾಗುವುದು) ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಲು ವಿಫಲರಾಗಿದ್ದಾರೆಂದು ಶಿವಮೊಗ್ಗ ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಸದರಿ ಅಧಿನಿಯಮದ ಪ್ರಕರಣ 308-ಸಿ ಹಾಗೂ ಸದರಿ ಆದೇಶದ ಖಂಡ 6 ರ ಉಪಖಂಡ (5)ರನ್ವಯ ದಿ: 3.7.2006 ರಂದು ನೋಟೀಸನ್ನು ಸದ್ರಿ ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸು ಶ್ರೀಮತಿ ಜಯಮ್ಮ ರವರಿಗೆ ಜಾರಿಯಾಗಿದ್ದಾಗ್ಯೂ ಕೂಡ ಅವರು ಆಯೋಗಕ್ಕೆ ಯಾವುದೇ ಉತ್ತರ ನೀಡಿರುವುದಿಲ್ಲ ಹಾಗೂ ಜಿಲ್ಲಾಧಿಕಾರಿಗಳೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿಲ್ಲವೆಂದು ತಿಳಿಸಿದ್ದರು.

ಈ ರೀತಿ ಸದರಿ ಅಭ್ಯರ್ಥಿಯು ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ನೀಡದೇ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸಲು ವಿಫಲರಾಗಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಸದರಿ ಅಧಿನಿಯಮದ ಪ್ರಕರಣ 308-ಸಿ ರನ್ವಯ ಶ್ರೀಮತಿ ಜಯಮ್ಮ ರವರನ್ನು ಆದೇಶ ಸಂಖ್ಯೆ: ರಾಚುಆ 57(2) ಟಿಝಡ್‌ಪಿ 2007 ದಿನಾಂಕ: 26.05.2007 ರಂತೆ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿತು.

ಶ್ರೀಮತಿ ಜಯಮ್ಮ ರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 9421/2007ನ್ನು ದಾಖಲಿಸಿ, ಚುನಾವಣಾ ಆಯೋಗದ ಆದೇಶವನ್ನು ಪ್ರಶ್ನಿಸಿದ್ದರು. ಅವರು ತಮ್ಮ ರಿಟ್ ಅರ್ಜಿಯಲ್ಲಿ ಚುನಾವಣಾಧಿಕಾರಿಗಳಿಗೆ ತಾನು ಲೆಕ್ಕಪತ್ರಗಳನ್ನು ಸಲ್ಲಿಸಿದ್ದು, ಹೀಗೆ ಸಲ್ಲಿಸಿದ ವಿವರಗಳನ್ನು ಚುನಾವಣಾಧಿಕಾರಿಗಳು ತಹಶೀಲ್ದಾರರ ಕಛೇರಿಗೆ ಒಪ್ಪಿಸಿದ್ದರೂ ಕೂಡ ತಹಶೀಲ್ದಾರರು ಚುನಾವಣಾ ಆಯೋಗಕ್ಕೆ ಲೆಕ್ಕಪತ್ರ ತಲುಪಿದ ಬಗ್ಗೆ ಮಾಹಿತಿ ನೀಡದೇ ಇದ್ದುದರಿಂದ ತನ್ನನ್ನು ಅನರ್ಹಗೊಳಿಸುವ ಆದೇಶವಾಗಿದೆಯೆಂದು ಹೇಳಿರುತ್ತಾರೆ. ಅವರು ಚುನಾವಣಾಧಿಕಾರಿಗಳಿಗೆ ಲೆಕ್ಕಪತ್ರ ಸಲ್ಲಿಸಿದ ಬಗ್ಗೆ ಸ್ವೀಕೃತಿಯನ್ನೂ ಸಹ ಹಾಜರುಪಡಿಸಿರುತ್ತಾರೆ. ಚುನಾವಣಾ ಆಯೋಗ ಕಳುಹಿಸಿದ ನೋಟೀಸಿಗೆ ಉತ್ತರವನ್ನು ನೀಡಲಿಲ್ಲವೆನ್ನುವುದನ್ನು ಒಪ್ಪಿಕೊಳ್ಳುತ್ತಾ, ಅದು ಉದ್ದೇಶಪೂರ್ವಕವಲ್ಲವೆಂದು ಹೇಳಿರುತ್ತಾರೆ. ಕರ್ನಾಟಕ ಉಚ್ಚ ನ್ಯಾಯಾಲಯವು ದಿ: 25.07.2007ರ ಆದೇಶದಲ್ಲಿ ರಿಟ್ ಅರ್ಜಿದಾರರಾದ ಶ್ರೀಮತಿ ಜಯಮ್ಮ ರವರು ದಿ: 22.8.2007ರಂದು ಚುನಾವಣಾ ಆಯೋಗದ ಮುಂದೆ ಹಾಜರಾಗಬೇಕೆಂದು ಆದೇಶಿಸಿ ಅರ್ಜಿದಾರರಿಗೆ ಇನ್ನೊಂದು ಸಮಯಾವಕಾಶ ನೀಡುವಂತೆ ಆದೇಶಿಸಿದೆ.

ಉಚ್ಚ ನ್ಯಾಯಾಲಯದ ಆದೇಶದಂತೆ ಶ್ರೀಮತಿ ಜಯಮ್ಮ ರವರು ದಿ: 22.8.07 ರಂದು ಆಯೋಗದಲ್ಲಿ ಹಾಜರಾಗಿ ಹೇಳಿಕೆ ನೀಡಿರುತ್ತಾರೆ ಹಾಗೂ ಚುನಾವಣಾಧಿಕಾರಿಗಳಿಗೆ ಲೆಕ್ಕ ಪತ್ರಗಳನ್ನು ನೀಡಿರುವ ಬಗ್ಗೆ ಸ್ವೀಕೃತಿ ರಶೀತಿಯ ನಕಲನ್ನೂ ಸಹ ಹಾಜರುಪಡಿಸಿರುತ್ತಾರೆ. ತಹಶೀಲ್ದಾರ್, ಭದ್ರಾವತಿ ರವರು ಶ್ರೀಮತಿ ಜಯಮ್ಮ ರವರು ಚುನಾವಣಾಧಿಕಾರಿಗಳಿಗೆ ಸಲ್ಲಿಸಿದ್ದ ಲೆಕ್ಕಪತ್ರ ವಿವರದ ಮೂಲ ದಾಖಲೆಗಳನ್ನು ಆಯೋಗಕ್ಕೆ ಕಳುಹಿಸಿದ್ದಾರೆ.

ಶ್ರೀಮತಿ ಜಯಮ್ಮ ರವರ ಹೇಳಿಕೆ ಹಾಗೂ ಎಲ್ಲಾ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ತಹಶೀಲ್ದಾರ, ಭದ್ರಾವತಿ ರವರು ಶ್ರೀಮತಿ ಜಯಮ್ಮ ರವರು ಚುನಾವಣಾಧಿಕಾರಿಗಳಿಗೆ ಕೊಟ್ಟ ಲೆಕ್ಕಪತ್ರಗಳ ದಾಖಲೆಗಳನ್ನು ತಮ್ಮ ಬಳಿ ಇಟ್ಟುಕೊಂಡು ಅದನ್ನು ಚುನಾವಣಾ ಆಯೋಗಕ್ಕೆ ತಿಳಿಸದೇ ಶ್ರೀಮತಿ ಜಯಮ್ಮ ರವರನ್ನು ಅನರ್ಹಗೊಳಿಸುವ ಆದೇಶವಾಗಲು ಮೂಲ ಕಾರಣರಾಗಿರುತ್ತಾರೆ.

ಶ್ರೀಮತಿ ಜಯಮ್ಮ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ನಿಯಮಾನುಸಾರ ಈಗಾಗಲೇ ಸಲ್ಲಿಸಿರುವುದರಿಂದ ಅವರನ್ನು ಅನರ್ಹರೆಂದು ಸದ್ರಿ ಅಧಿನಿಯಮದ ಪ್ರಕರಣ 308-ಸಿ ಪ್ರಕಾರ ಘೋಷಿಸಲು ಅವಕಾಶವಿಲ್ಲ. ಶ್ರೀಮತಿ ಜಯಮ್ಮ ರವರು ಚುನಾವಣಾ ಆಯೋಗಕ್ಕೆ ಕಳುಹಿಸಿದ ನೋಟೀಸಿಗೆ ಉತ್ತರ ನೀಡಿಲ್ಲವೆಂಬುದನ್ನು ಒಪ್ಪಿಕೊಳ್ಳುತ್ತಾ ಅದು ಉದ್ದೇಶಪೂರ್ವಕಲ್ಲವೆಂದು ಹೇಳಿರುತ್ತಾರೆ. ಅಭ್ಯರ್ಥಿಯು ಗ್ರಾಮಾಂತರ ಪ್ರದೇಶದಿಂದ ಬಂದ ಮಹಿಳೆಯಾದ್ದರಿಂದ ಅವರು ಹೇಳಿರುವ ಈ ವಿಷಯ ಸುಳ್ಳು ಎಂದು ತಳ್ಳಿ ಹಾಕಲು ಸಾಧ್ಯವಿಲ್ಲ. ತಹಶೀಲ್ದಾರ್, ಭದ್ರಾವತಿ ರವರು ಶ್ರೀಮತಿ ಜಯಮ್ಮ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಕೊಟ್ಟಿದ್ದಾರೆಂದು ಚುನಾವಣಾ ಆಯೋಗಕ್ಕೆ ತಿಳಿಸಿದ್ದಲ್ಲಿ, ಶ್ರೀಮತಿ ಜಯಮ್ಮ ರವರನ್ನು ಅನರ್ಹಗೊಳಿಸುವ ಆದೇಶವನ್ನು ಚುನಾವಣಾ ಆಯೋಗವು ಹೊರಡಿಸುವ ಪ್ರಶ್ನೆಯೇ ಇರಲಿಲ್ಲ. ತಹಶೀಲ್ದಾರ್, ಭದ್ರಾವತಿ ರವರು ಎಸಗಿದ ತಪ್ಪಿಗೆ ಶ್ರೀಮತಿ ಜಯಮ್ಮ ರವರನ್ನು ಅನರ್ಹರೆಂದು ಘೋಷಿಸಲು ಸಾಧ್ಯವಿಲ್ಲ. ಶ್ರೀಮತಿ ಜಯಮ್ಮ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸಿದಾಗ್ಯೂ ಸಹ ಮೇಲೆ ವಿವರಿಸಿದ ಸಂದರ್ಭದಲ್ಲಿ ಅವರನ್ನು ಅನರ್ಹರೆಂದು ರಾಜ್ಯ ಚುನಾವಣಾ ಆಯೋಗ ಘೋಷಿಸಿದ್ದುದು ಪ್ರಾರಂಭದಿಂದಲೇ ಶೂನ್ಯವಾದ (ab initio void) ಆದೇಶವಾಗಿರುತ್ತದೆ.

ಮೇಲೆ ವಿವರಿಸಿದ ಕಾರಣಗಳಿಂದ ಶ್ರೀಮತಿ ಜಯಮ್ಮ ರವರನ್ನು ಅನರ್ಹಗೊಳಿಸಿದ ಆದೇಶ ಸಂಖ್ಯೆ: ರಾಚುಆ 57(2) ಟಿಝಡ್‌ಪಿ 2007 ದಿನಾಂಕ: 26.5.2007 ರಲ್ಲಿ ಆದೇಶವನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

ಪಿ.ಆರ್. 1166

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**
**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-74:2007, ದಿನಾಂಕ: 28ನೇ ಆಗಸ್ಟ್ 2007**

**ಅರ್ಜಿದಾರರು:**

1. ಗುತ್ತೇಮ್ಮ ಕೋಂ ವೀರಪ್ಪ ಹಾಡೇದರ ಉಕ್ಕಡಗಾತ್ರಿ, ಹರಿಹರ, ತಾ: ಹಾಲಿ ವಾಸ: ಆರ್. ವಿಜಯಕುಮಾರ್ ವಿನೋಬನಗರ ರಾಮೇಶ್ವರನಿಲಯ ಶಿವಮೊಗ್ಗ.

**ವಿರುದ್ಧ**

**ಪ್ರತಿವಾದಿಗಳು:**

1. ಈರಪ್ಪ ಬೀರಪ್ಪ ಹಾಡೇದಾರ ಮಾಲೀಕರು ಟ್ರಾಕ್ಟ್ ಮತ್ತು ಟ್ರೈಲರ್ ಉಕ್ಕಡ ಗಾತ್ರಿ ಹರಿಹರ ತಾ: ದಾವಣಗೆರೆ ಜಿ.
2. ಯುನೈಟೆಡ್ ಇನ್ಶೂರೆನ್ಸ್ ಕಂ ಲಿ., ದಾವಣಗೆರೆ.

**ಅಧಿಸೂಚನೆ**

ಅರ್ಜಿದಾರರಾದ ಗುತ್ತೇಮ್ಮ ಕೋಂ ವೀರಪ್ಪ ಹಾಡೇದಾರ ಇವರು ತಮ್ಮ ಮಗನಾದ ಬೀರೇಶ್ ಉರುಫ್ ಬೀರಪ್ಪ ಇವರು ಒಂದನೇ ಪ್ರತಿವಾದಿಗಳಾದ ಈರಪ್ಪ ಬೀರಪ್ಪ ಹಾಡೇದಾರ ಉಕ್ಕಡಗಾತ್ರಿ ಹರಿಹರ ತಾ: ಚಾಲಕರಾಗಿ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 01.06.07 ರಂದು ಸಂಭವಿಸಿದ ಅಪಘಾದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
Labour Officer and Commissioner For
Workmen Compensation, Shimoga.

ಪಿ.ಆರ್. 1149

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಎಸ್.ಎಸ್. ಕಣವಿಮಠ, ಕೃಷಿ ಸಹಾಯಕ ಭೂಸಾರ ಸಂರಕ್ಷಣೆ ಬೆಳ್ತಂಗಡಿ ಚಾರ್ಜ ಕಛೇರಿ ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ ಹಾಸನ ಇವರ ವಿರುದ್ಧ ನ್ಯಾಯಾಲಯದ ಕ್ರಿಮಿನಲ್ ಪ್ರಕರಣದ ಶಿಸ್ತು ಕ್ರಮ.

**ಓದಲಾಗಿದೆ:**

1. ಇಲಾಖೆ ಆದೇಶ ಸಂಖ್ಯೆ:ಇಎಸ್‌ಟಿ-1/ಐಎನ್‌ಕ್ಯೂ-4/23/96-97, ದಿನಾಂಕ:7.7.2001.
2. ಜೆ.ಎಂ.ಎಫ್.ಸಿ. ನ್ಯಾಯಾಲಯ ಬೆಳ್ತಂಗಡಿ ಕ್ರಿಮಿನಲ್ ಕೇಸ್ ನಂ 709/1997 ಮತ್ತು 710/1997 ಅಂತಿಮ ತೀರ್ಪು ಆದೇಶ ದಿನಾಂಕ 31.10.06.
3. ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 9 ಸೇಇವಿ 95 ದಿನಾಂಕ 26.6.96.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ಕಣವಿಮಠ ಕೃಷಿ ಸಹಾಯಕ ಇವರು ಈ ಹಿಂದೆ ಭೂಸಾರ ಸಂರಕ್ಷಣೆ ಬೆಳ್ತಂಗಡಿ ಚಾರ್ಜ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 1990-91 ರಿಂದ 1995-96ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಭೂಸಾರ ಸಂರಕ್ಷಣೆ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಲ್ಲಿ ವಿಫಲರಾಗಿದ್ದ ನೌಕರ / ಅಧಿಕಾರಿಗಳಲ್ಲಿ ಒಬ್ಬರಾಗಿದ್ದು ಕಾಮಗಾರಿಗಳಿಗೆ ಹಣ ದುರುಪಯೋಗಪಡಿಸಿಕೊಂಡಿರುವ

ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ ಓದಲಾದ ಕ್ರ.ಸಂ. (1)ರಲ್ಲಿ ಸದರಿ ಅಧಿಕಾರಿ ನೌಕರರ ವಿರುದ್ಧ ಮಾಡಲಾಗಿದ್ದ ಇಲಾಖಾ ಆರೋಪಗಳು ಸಾಬೀತಾಗಿಲ್ಲವೆಂದು ಪರಿಗಣಿಸಿ ಸದರಿ ನೌಕರರ ವಿರುದ್ಧ ಸ್ಥಳೀಯ ಆರಕ್ಷಕ ಠಾಣೆಗಳಲ್ಲಿ ದಾಖಲಿಸಿರುವ ದೂರುಗಳ ನಿರ್ಣಯವನ್ನು ಬಾಕಿ ಇಟ್ಟು ನೌಕರರ ವಿರುದ್ಧ ಇಲಾಖಾ ಆರೋಪಗಳಿಂದ ದೋಷ ಮುಕ್ತರನ್ನಾಗಿ ಆದೇಶಿಸಿದೆ.

ಓದಲಾದ ಕ್ರ.ಸಂ. (2) ರಲ್ಲಿ ಸದರಿ ನೌಕರರವಿರುದ್ಧ ದಾಖಲಾಗಿದ್ದ ಕ್ರಿಮಿನಲ್ ಕೇಸ್ ನಂ 700/1997 ಮತ್ತು 709/1997 ಪ್ರಕರಣಕ್ಕೆ ಅಂತಿಮ ತೀರ್ಪು ಬಂದಿದ್ದು ಆರೋಪ ಸಾಬೀತಾಗಿದೆ. ನ್ಯಾಯಾಲಯದ ಆದೇಶ ದಿನಾಂಕ: 31.10.2006ರಲ್ಲಿ ಈ ಕೆಳಕಂಡ ದಂಡನೆ ವಿಧಿಸಲಾಗಿದೆ.

1. I.P.C. ಸೆಕ್ಷನ್ 409 ರನ್ವಯ 2 ವರ್ಷ ಕಾಲ ಸಾದಾ ಕಾರಾಗೃಹವಾಸ (Simple imprisonment) ಹಾಗೂ ರೂ. 2,000/- ದಂಡ, ದಂಡವನ್ನು ಕಟ್ಟದೆ ಇದ್ದಲ್ಲಿ ಮತ್ತೆ 6 ತಿಂಗಳ ಸಾದಾ ಕಾರಾಗೃಹ ವಾಸ (Simple imprisonment)
2. I.P.C. ಸೆಕ್ಷನ್ 420 ರನ್ವಯ 1 ವರ್ಷ 6 ತಿಂಗಳ ಕಾಲ ಸಾದಾ ಕಾರಾಗೃಹವಾಸ (Simple imprisonment) ಹಾಗೂ ರೂ. 1,500/- ದಂಡ ದಂಡವನ್ನು ಕಟ್ಟದೆ ಇದ್ದಲ್ಲಿ ಮತ್ತೆ 6 ತಿಂಗಳ ಸಾದಾ ಕಾರಾಗೃಹ ವಾಸ (Simple imprisonment)
3. I.P.C ಸೆಕ್ಷನ್ 468 ರನ್ವಯ 1 ವರ್ಷ 6 ತಿಂಗಳ ಕಾಲ ಸಾದಾ ಕಾರಾಗೃಹವಾಸ (Simple imprisonment) ಹಾಗೂ ರೂ.1,500/- ದಂಡ, ದಂಡವನ್ನು ಕಟ್ಟದೆ ಇದ್ದಲ್ಲಿ ಮತ್ತೆ 6 ತಿಂಗಳ ಸಾದಾ ಕಾರಾಗೃಹ ವಾಸ (Simple imprisonment)

ಇವೆಲ್ಲಾ ಶಿಕ್ಷೆಗಳನ್ನು ಏಕ ಕಾಲಕ್ಕೆ ಅನುಭವಿಸಲು ನ್ಯಾಯಾಲಯವು ಆದೇಶಿಸಿರುತ್ತದೆ. ಈ ತೀರ್ಪಿಗೆ ಹೆಚ್ಚುವರಿ ನ್ಯಾಯಾಲಯದಲ್ಲಿ ಅಪೀಲು ಸಂಖ್ಯೆ 323/06 ಮತ್ತು 324/06 ರಂತೆ ಮೇಲ್ಮನವಿ ದಾಖಲು ಮಾಡಲಾಗಿದ್ದು 700/1997 ಮತ್ತು 709/1997 ಪ್ರಕರಣಕ್ಕೆ ಅಂತಿಮ ತೀರ್ಪಿಗೆ ತಡೆಯಾಜ್ಞೆ ನೀಡಲಾಗಿದೆಯೆಂದು ಸಹಾಯಕ ಕೃಷಿ ನಿರ್ದೇಶಕರು, ಬೆಳ್ತಂಗಡಿ ಇವರು ತಮ್ಮ ಪತ್ರದ ದಿನಾಂಕ:4.7.2007ರಲ್ಲಿ ತಿಳಿಸಿರುತ್ತಾರೆ.

ಓದಲಾದ ಕ್ರ.ಸಂ. (3)ರ ಸರ್ಕಾರದ ಸುತ್ತೋಲೆಯ ಸಂಖ್ಯೆ ಸಿಆಸುಇ 9 ಸೇಇವಿ 95 ದಿನಾಂಕ: 26.6.96 ಪ್ಯಾರಾ (1) ಹಾಗೂ (3) ರನ್ವಯ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ನೌಕರರನ್ನು ವಿಚಾರಣೆಗೆ ಒಳಪಡಿಸದೆ ಇವರ ವಿರುದ್ಧ ಕ್ರಮ ತೆಗೆದುಕೊಳ್ಳ ಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ ಹೊರಡಿಸಿದೆ.

**ಕಛೇರಿ ಆದೇಶ ಸಂಖ್ಯೆ: ಇಎಸ್‌ಟಿ-1/ಐಎನ್‌ಕ್ಯೂ-4/23/96-97, ದಿನಾಂಕ: 18ನೇ ಆಗಸ್ಟ್ 2007**

ಈ ಕೆಳಗೆ ಸಹಿ ಮಾಡಿರುವ ಡಾ:ಎಂ. ಮಲ್ಲಪ್ಪ ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಮೇಲಿನ ಪ್ರಕರಣದ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎಸ್.ಎಸ್. ಕಣವಿಮಠ, ಕೃಷಿ ಸಹಾಯಕ, ಭೂಸಾರ ಸಂರಕ್ಷಣೆ ಬೆಳ್ತಂಗಡಿ ಚಾರ್ಜ ಕಛೇರಿ ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ ಹಾಸನ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(i) ರಡಿಯಲ್ಲಿ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95 ದಿನಾಂಕ: 26.6.96ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ.

ಕೃಷಿ ನಿರ್ದೇಶಕರು
ಹಾಗೂ ಶಿಸ್ತು ಪ್ರಾಧಿಕಾರಿಗಳು

ಪಿ.ಆರ್. 1150

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6 ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-32/07, ದಿನಾಂಕ: 29ನೇ ಆಗಸ್ಟ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಸಾವಿತ್ರಮ್ಮ ಕೋಂ ಲೇಟ್ ಮುನಿಯಪ್ಪ R/at ಪರಪ್ಪನ್ ಹಳ್ಳಿ ಆನೇಕಲ್ ತಾ।। ಜಿಗಣಿ ಹೋಬಳಿ ಬೆಂಗಳೂರು ಜಿಲ್ಲೆ.

1. ಶ್ರೀ ಹೆಚ್. ಪಿ ಜಗದೀಶ್ ಪರಗಡ್ಡ ವಿಲೇಜ್, ಆನೇಕಲ್ ತಾ।। ಬೆಂಗಳೂರು-59
2. ದಿ ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ., C.B.O. II ಕಣ್ಣಟ್ ರೋಡ್, ಕೋಯಿನ್ಸ್ ರಸ್ತೆ, ಕ್ರಾಸ್, ಬೆಂಗಳೂರು-52

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:23.3.07 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಪತಿಯಾದ ಲೇಟ್ ಮುನಿಯಪ್ಪ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಗಳನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ

ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ
ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-6, ಬೆಂಗಳೂರು-560 029.

ಪಿ.ಆರ್. 1151

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6 ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-23/07, ದಿನಾಂಕ: 29ನೇ ಆಗಸ್ಟ್ 2007**

**ಅರ್ಜಿದಾರರು:**

1. ಶ್ರೀಮತಿ ಕಲಾವತಿ ಎಂ. @ ಕಲಾ ಕೋಂ ಲೇಟ್ ಎನ್. ಮೋಹನ್ ವಯಸ್ಸು 28 ವರ್ಷ
2. ಕು: ಪವಿತ್ರ ಬಿನ್ ಲೇಟ್ ಎನ್ ಮೋಹನ್ ವಯಸ್ಸು 8 ವರ್ಷ
3. ಮಾಸ್ಟರ್ ಅಜಿತ್‌ಕುಮಾರ್ ಬಿನ್ ಲೇಟ್ ಎನ್ ಮೋಹನ್ ವಯಸ್ಸು 6 ವರ್ಷ ವಾಸ ಕೇರಾಫ್ ಕಾಕ್ಕಟಾ ಚಂದಾಪುರ ಆನೇಕಲ್ ತಾ॥ ಬೆಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಕೇಶವನ್ ವಾಸ ಸ.ನಂ. 179, 6ನೇ ಮೈನ್ ಯಲಹಂಕ ನ್ಯೂಟೌನ್ 5ನೇ ಮೈನ್ ಎ. ಸೆಕ್ಟರ್ ಬೆಂಗಳೂರು-04.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:29.8.05 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ' ಶ್ರೀ ಕೇಶವನ್ ವಾಸ ನಂ: 179, 6ನೇ ಮೈನ್ ಯಲಹಂಕ, ನ್ಯೂಟೌನ್, 5ನೇ ಮೈನ್, ಎ ಸೆಕ್ಟರ್ ಇವರು ಮೇಲೆ ವಿಳಾಸಿಸಿರುವ 1ನೇ ಅರ್ಜಿದಾರರ ಪತಿಯವರು ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಗಳನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಎನ್.ಬಿ. ರಾಮಚಂದ್ರ
ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-6, ಬೆಂಗಳೂರು-560 029.

ಪಿ.ಆರ್. 1152

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6 ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ:ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-36/07, ದಿನಾಂಕ: 25ನೇ ಆಗಸ್ಟ್ 2007**

**ಅರ್ಜಿದಾರರು:**

1. ಶ್ರೀಮತಿ ಇಂದ್ರಾಕೌರ್
2. ಮಾ॥ ಪ್ರಭಾತ್ ಸಿಂಗ್
3. ಕು: ಖುಷ್ಬು
4. ಸೂರ್ಯ ಆಟೋ ಸೆಂಟರ್ MTB ರಸ್ತೆ, ನಂ-19 ಜೆ.ಸಿ. ರಸ್ತೆ, ಜರ್ನಲಿಸ್ಟ್ ಕಾಲೋನಿ, ಬೆಂಗಳೂರು-02.

**ವಿರುದ್ಧ**

**ಪ್ರತಿವಾದಿಗಳು:**

1. M/S ರಾಯಲ್ ಸುಂದರಂ ಅಲೈಯನ್ಸ್ ಇನ್ಸ್‌ಶ್ಯೂರೆನ್ಸ್ ಕಂ.ಲಿ., ನಂ-132 2ನೇ ಮಹಡಿ, ಬ್ರಿಗೇಡ್ ರಸ್ತೆ, ಬೆಂಗಳೂರು-25.
2. ಶ್ರೀ ದೇವೇಂದ್ರ ಸಿಂಗ್ ಶಾದ್ ನಂ-5, ನಂ-19, 1ನೇ ಮಹಡಿ, ಕುಮಾರ ಹಾಸ್ಟೆಲ್ ಬಿಲ್ಡಿಂಗ್ MTB ರಸ್ತೆ, ಜರ್ನಲಿಸ್ಟ್ ಕಾಲೋನಿ, ಬೆಂ-02.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:1.2.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಪತಿಯಾದ ಪ್ರತಾಪ್ ಸಿಂಗ್ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಗಳನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ
ಪಿ.ಆರ್. 1153 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-6, ಬೆಂಗಳೂರು-560 029.

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-11/2007, ದಿನಾಂಕ: 23ನೇ ಆಗಸ್ಟ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶ್ರೀಮತಿ ರಾಜಮ್ಮ W/o ಲೇಟ್ ಆರ್ ರಾಜು
C/o ಸೋಮಣ್ಣ ವಿದ್ಯಾಜ್ಯೋತಿ ನಗರ್, 2ನೇ
ಕ್ರಾಸ್, 11ನೇ ಮೈನ್, ಹೊಂಗಸಂದ್ರಾ ,
ಬೇಗೂರು ರೋಡ್.

ಬೆಂಗಳೂರು ಎಲೆಕ್ಟ್ರಿಸಿಟಿ ಪಿಪ್‌ಲೈ ಕಂಪನಿ ಲಿಮಿಟೆಡ್,
ಅನೀಸ ಆಫ್ ಎಕ್ಸಿಕ್ಯೂಟಿವ್ ಇಂಜಿನಿಯರ್, ಅಂಡ್
ಸೌತ್ ಡಿವಿಜನ್ ನಂ-6, 7ನೇ ಮೈನ್, 3ನೇ ಬ್ಲಾಕ್
ಕೋರಮಂಗಲ, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:26.12.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಪತಿಯಾದ ಲೇಟ್ ಆರ್ ರಾಜು ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ
ಪಿ.ಆರ್. 1154 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-6, ಬೆಂಗಳೂರು-560 029.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ:F-107/07/539, ದಿನಾಂಕ: 25ನೇ ಆಗಸ್ಟ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶ್ರೀಮತಿ ರೇಣವ್ವ W/o ರಂಗಪ್ಪ ಸಂಗನಾಳ @
ನಾಗರಾಳ ಸಾ॥ ರೋಣ. ಗದಗ ಜಿಲ್ಲೆ.

1. ಅಹಮದ್ ಹುಸೇನ್
S/o ಮಹಬೂಬಸಾಬ ಸವಿ ಟ್ರ್ಯಾಕ್ಟರ್ ಟ್ರೇಲರ್
KA-26/2504 T-2505 ಸಾ॥ ಶಿವಪೇಟೆ ಓಣಿ,
ರೋಣ, ಗದಗ ಜಿಲ್ಲೆ.
2. ದಿ ಡಿವಿಜನಲ್ ಮೇನೇಜರ್
ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ.,
ಡಿವಿಜನಲ್ ಆಫೀಸ್, ಪಿ.ಬಿ. ರಸ್ತೆ, ಧಾರವಾಡ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರೇಣವ್ವ W/o ರಂಗಪ್ಪ ಸಂಗನಾಳ @ ನಾಗರಾಳ ಸಾ॥ ರೋಣ, ಗದಗ ಜಿಲ್ಲೆ ಇವರು, ತಾವು ಮೃತ ಮಲ್ಲಪ್ಪ ಇವರ ತಾಯಿ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಲ್ಲಪ್ಪ ಇವರು ಒಂದನೇ ಪ್ರತಿವಾದಿಗಳಾದ ಅಹಮದ್ ಹುಸೇನ್ S/o ಮಹಬೂಬಸಾಬ ಸವಿ ಇವರಲ್ಲಿ ಕಾರ್ಮಿಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ

ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

ಪಿ.ಆರ್. 1159

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-73:2007, ದಿನಾಂಕ: 28ನೇ ಆಗಸ್ಟ್ 2007**

**ಅರ್ಜಿದಾರರು:**

1. ನಿರ್ಮಲ ಕೋಂ ಲೇಟ್ ರಾಜಪ್ಪ ಮತ್ತಿಘಟ್ಟ
ಗ್ರಾಮ ಶಿಕಾರಿಪುರ ತಾ:

**ವಿರುದ್ಧ**

**ಪ್ರತಿವಾದಿಗಳು:**

1. ಅಮೀರ್ ಅಹ್ಮದ್ ಮೆಹಬೂಬ್ ಮುಲ್ಲಾ
ಮಾಲೀಕರು, ಮಹೇಂದ್ರ ಚಾಂಪಿಯನ್ಸ್ ಗೂಡ್ಸ್
ಹಂಸಬಾವಿ ಹಿರೇಕೆರೂರು, ತಾ: ಹಾವೇರಿ ಜಿಲ್ಲಾ
2. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ ಲಿ.,
ಎ.ಎ. ಸರ್ಕಲ್, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ/ಶ್ರೀಮತಿ ರಾಜಪ್ಪ ಬಿನ್ ಶೇಖರಪ್ಪ ಇವರು ಪ್ರತಿವಾದಿ ಅಮಿರ್ ಅಹ್ಮದ್ ಮೆಹಬೂಬ್ ಮುಲ್ಲಾ ಹಂಸಬಾವಿ ಹಿರೇಕೆರೂರು ತಾ. ಇವರಲ್ಲಿ ಹಮಾಲಿ, ಕೂಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 23.05.06 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. 1ನೇ ಅರ್ಜಿದಾರರು.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
Labour Officer and Commissioner For
Workmen Compensation, Shimoga.

ಪಿ.ಆರ್. 1160

## ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ

**ಅಧಿಸೂಚನೆ ಸಂ. 377/ಸಂ.ವಿ./ಸಿ.ಒ.ಪಿ/2007, ದಿನಾಂಕ: 25ನೇ ಆಗಸ್ಟ್ 2007**

ಬೆಂಗಳೂರು ನಗರ ಇಂದಿರಾನಗರ ಸಂಚಾರ ಪೊಲೀಸ್ ಠಾಣೆಯ ಸರಹದ್ದಿಗೆ ಸೇರಿರುವ ಹೆಚ್.ಎ.ಎಲ್. 2ನೇ ಹಂತ, 12ನೇ ಎ ಮುಖ್ಯ ರಸ್ತೆಯ 80 ಅಡಿರಸ್ತೆ ಜಂಕ್ಷನ್‌ನಿಂದ 8ನೇ ಅಡ್ಡರಸ್ತೆವರೆಗೆ ಇತ್ತೀಚಿನ ದಿನಗಳಲ್ಲಿ ವಾಹನ ದಟ್ಟಣೆ ಅತಿ ಹೆಚ್ಚಾಗಿರುತ್ತದೆ. ಈ ರಸ್ತೆಯಲ್ಲಿ ದ್ವಿಮುಖಿ ಸಂಚಾರವಿರುತ್ತದೆ. ಈ ರಸ್ತೆಯ ಎರಡೂ ಬದಿಯಲ್ಲಿ ಹೆಚ್ಚಾಗಿ ವಾಸದ ಮನೆಗಳಿರುತ್ತವೆ. ಅವುಗಳಲ್ಲಿ ಹೆಚ್ಚಾಗಿ ಹಿರಿಯ ನಾಗರೀಕರು ವಾಸ ಮಾಡುತ್ತಿರುತ್ತಾರೆ. ಹಾಗೂ ಈ ರಸ್ತೆಯಲ್ಲಿ ಎನ್.ಪಿ.ಎಸ್. ಸ್ಕೂಲ್ ಮತ್ತು ಮಾಂಟೆಸರಿ ಶಾಲೆ ಇದ್ದು ಇಲ್ಲಿನ ಮಕ್ಕಳು ಈ ರಸ್ತೆಯನ್ನು ದಾಟಲು ಬಳಸುತ್ತಿದ್ದು ಇವರ ಸುರಕ್ಷತೆಗೆ ಧಕ್ಕೆಯಾಗದಂತೆ ನೋಡಿಕೊಳ್ಳಬೇಕಾದ ಅವಶ್ಯಕತೆ ಇರುತ್ತದೆ. ಈ ರಸ್ತೆಯಲ್ಲಿ ದ್ವಿಮುಖ ಸಂಚಾರ ಇರುವುದರಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುತ್ತದೆ ಮತ್ತು ಅಪಘಾತಗಳಾಗುವ ಸಂಭವವೂ ಇರುತ್ತದೆ. ಆದ್ದರಿಂದ ಈ ರಸ್ತೆಯ ಅಂದರೆ ಇಂದಿರಾನಗರ 80 ಅಡಿ ರಸ್ತೆ ಜಂಕ್ಷನ್‌ನಿಂದ 8ನೇ ಅಡ್ಡರಸ್ತೆವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಹೋಗುವ ವಾಹನ ಸಂಚಾರವನ್ನು ನಿಷೇದಿಸುವುದು ಅನಿವಾರ್ಯವಾಗಿರುತ್ತದೆ.

ಆದುದರಿಂದ ಕಲಂ 115 ಮೋಟಾರು ವಾಹನ ಕಾಯಿದೆ 1988 ಹಾಗೂ ಕಲಂ: 3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿರ್ಬಂಧವನ್ನು ಆದೇಶಿಸಿರುತ್ತೇನೆ.

ಹೆಚ್.ಎ.ಎಲ್. 2ನೇ ಹಂತ 12ನೇ 'ಎ' ಮುಖ್ಯ ರಸ್ತೆಯ 80 ಅಡಿ ರಸ್ತೆ ಜಂಕ್ಷನ್‌ನಿಂದ 8ನೇ ಅಡ್ಡ ರಸ್ತೆವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಹೋಗುವ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ 1988ನೇ ಮೋಟಾರು ವಾಹನ ಕಾಯ್ದೆ ಕಲಂ: 116 ಹಾಗೂ 1960ನೇ ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ ಕಲಂ: 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸಂಚಾರ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 25ನೇ ಆಗಸ್ಟ್ 2007 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 25/8/2007 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1161 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**OFFICE OF THE VAT SUB OFFICE-281, KARKALA**

**(Notified Authority under Rule 6(i) of the CST (Karnataka) Rules 1957)**

**NOTIFICATION**

**No. 29680043579/2007-08, Dated: 27th August 2007**

By virtue of the provisions of Rule 12(2) of the CST (Registration & Turnover) Rules 1957, and Rule 6(e) and 6(i) of the CST (Karnataka) Rules 1957, it is hereby notified for general information that the declaration in Form 'H' described below are declared to be obsolete and invalid.

| Sl. No. | Name of the declaration Form declared obsolete and invalid | Name & Address of the dealer to whom forms were issued by the Department | To whom the forms were issued by the dealer | Date from which declared obsolete & Reasons | Name of the Circle issuing the Form | Reasons |
|---|---|---|---|---|---|---|
| 1. | Form 'H' bearing No. F-717168 | M/s Bola Raghavendra & Sons, Kukundoor, Karkala Tq. Udupi Dist. TIN-29680043579 | Smt H. Meera R. Nayak M/s Sri Vinayaka Cashew Exports, Hebri, Udupi Dist. 'H' Form No. F-717168 for Rs. 69,71,816/- | 3.1.07 lost | V.S.O.-281, Karkala | Lost |

Commercial Tax Officer,

P.R. 1162 V.S.O. 281, Karkala.

**ಉಪ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ**

**ರೈಲ್ವೆ ನಿಲ್ದಾಣ ರಸ್ತೆ, ಗಾಂಧಿನಗರ, ತುಮಕೂರು-572 101.**

**ಸಾಧಾರಣ ಮರಳು ಹರಾಜು ಪ್ರಕಟಣೆ**

**ಅಧಿಸೂಚನೆ ಸಂಖ್ಯೆ: ಸಿ.ಐ.ಎಂ.ಎಂ.ಎನ್. 2003, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2003**

ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕಿನ ಬಿರದೇನಹಳ್ಳಿ ಗ್ರಾಮದ ತುಂಬಾಡಿ ಕೆರೆಯಲ್ಲಿ ಲಭ್ಯವಿರುವ ಸಾಮಾನ್ಯ ಮರಳು ನಿಕ್ಷೇಪ ಪ್ರದೇಶವನ್ನು ಬಹಿರಂಗ ಹರಾಜನ್ನು "ಎಲ್ಲಿದೆಯೋ ಹಾಗೆ ಹೇಗಿದೆಯೋ ಹಾಗೆ" ಹರಾಜು ಮಾಡಲಾಗುವುದು.

ಹರಾಜಿನಲ್ಲಿ ಭಾಗವಹಿಸುವವರು ಹೆಚ್ಚಿನ ವಿವರಗಳಿಗಾಗಿ ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ರೈಲ್ವೆ ಸ್ಟೇಷನ್ ಮುಖ್ಯ ರಸ್ತೆ, ಗಾಂಧಿನಗರ, ತುಮಕೂರು ಜಿಲ್ಲೆ, ಇವರಲ್ಲಿ ಸಂಪರ್ಕಿಸಲು ಕೋರಲಾಗಿದೆ.

| ಕ್ರ. ಸಂ. | ಗ್ರಾಮ | ತಾಲ್ಲೂಕು | ವಿಸ್ತೀರ್ಣ | ಬ್ಲಾಕ್ ನಂ. | (ಇ.ಎಂ.ಡಿ) ಭದ್ರತಾ ಠೇವಣಿ ರೂ.ಗಳಲ್ಲಿ |
|---|---|---|---|---|---|
| 01. | ಬಿರದೇನಹಳ್ಳಿ | ಕೊರಟಗೆರೆ | 2-20 | 1 | 25,000/- |

ಉಪ ನಿರ್ದೇಶಕರು,

ಪಿ.ಆರ್. 1163 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು.

**ವಸತಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ವಇ 73 ಕೊಮಂಇ 2006, ಬೆಂಗಳೂರು, ದಿನಾಂಕ: 21ನೇ ಜುಲೈ 2007**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆಯ ವ್ಯಾಪ್ತಿಯ ಕೆ.ಸಿ.ಟಿ.ಮಿಲ್ ಭಾಗ-2ರ ಕೊಳಚೆ ಪ್ರದೇಶವನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ರವರು ತಮ್ಮ ಅಧಿಸೂಚನೆ ಸಂಖ್ಯೆ:ಜಿನಅಕೋ/ಕೊಪ್ರ/ಕೆಸಿಟಿ-2/4/2005-06, ದಿನಾಂಕ:04.09.06 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ 33 ರಂತೆ) ರ ಕಲಂ 3(1)ರಂತೆ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಅಧಿನಿಯಮ ಕಲಂ 17 ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ. ಆದ್ದರಿಂದ ಸಂಬಂಧಿಸಿದವರಿಗೆ/ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ

ಆಸಕ್ತಿಯುಳ್ಳವರು ಭೂ ಸ್ವಾಧೀನ ಮಾಡಬಾರದೆಂಬುದಕ್ಕೆ ಕಾರಣ/ಆಕ್ಷೇಪಣೆ/ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕಟವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ವಸತಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು-1 ಇವರಿಗೆ ಸಲ್ಲಿಸಬಹುದು.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು | ಖಾತೆದಾರರ ಹೆಸರು | ಗ್ರಾಮ | ಸಿ.ಟಿ.ಎಸ್ ನಂ. | ವಿಸ್ತೀರ್ಣ | ಮೇರೆಗಳು |
|---|---|---|---|---|---|---|
| 1. | ಕೆ.ಸಿ.ಟಿ. ಮಿಲ್ ಭಾಗ-2 | 1. ಶ್ರೀ ಕೃಷ್ಣಸಾಯಲ್ಲಪ್ಪ ಕಬಾಡೆ.<br>2. ಶ್ರೀಮತಿ ಲಕ್ಷ್ಮೀಬಾಯಿ ಕೋಂ ಕೃಷ್ಣಸಾಯಲ್ಲಪ್ಪ ಕಬಾಡೆ. | ಹುಬ್ಬಳ್ಳಿ | ಸಿ.ಟಿ.ಎಸ್. ಸರ್ವೆ ನಂ.95/72 | 433.77 ಚ.ಯಾ (3 ಗುಂ.10ಅ) 4333.77 ಚ.ಯಾ.(3 ಗುಂ.10ಅ) | ಪೂರ್ವಕ್ಕೆ-ರಸ್ತೆ.<br>ಪಶ್ಚಿಮಕ್ಕೆ-ಸಿಟಿಎಸ್ 95/71<br>ಉತ್ತರಕ್ಕೆ-ರಸ್ತೆ<br>ದಕ್ಷಿಣಕ್ಕೆ-ಸಿಟಿಎಸ್ 95/73 |
| | | 1. ಶ್ರೀ ಪರಶುರಾಮಸಾ ಯಲ್ಲಪ್ಪ ಕಬಾಡೆ<br>2. ಶ್ರೀಮತಿ ಅನಸೂಯಾಬಾಯಿ ಕೋಂ.ಪರಶುರಾಮಸಾ ಯಲ್ಲಪ್ಪ ಕಬಾಡೆ | ಹುಬ್ಬಳ್ಳಿ | ಸಿ.ಟಿ.ಎಸ್. ಸರ್ವೆ ನಂ.95/73 | 404. ಚ.ಯಾ (3 ಗುಂ.5.66ಅ) 404 ಚ.ಯಾ. (3 ಗುಂ.566ಅ) 404 ಚ.ಯಾ (3 ಗುಂ.5.66 ಅ) | ಪೂರ್ವಕ್ಕೆ-ರಸ್ತೆ<br>ಪಶ್ಚಿಮಕ್ಕೆ-ಸಿಟಿಎಸ್ 95/71<br>ಉತ್ತರಕ್ಕೆ-ರಸ್ತೆ<br>ದಕ್ಷಿಣಕ್ಕೆ-ನಾಲಾ |
| | | 3. ಶ್ರೀ ತುಲಸೀದಾಸ ಪರಶುರಾಮಸಾ ಯಲ್ಲಪ್ಪ ಕಬಾಡೆ | | | | |
| | | **ಒಟ್ಟು** | | | **17 ಗುಂ.5ಅ.2079 5/9 ಚ.ಯಾ.** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1164 **ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## DEPARTMENT OF PORTS & INLAND WATER TRANSPORT, KARWAR

### AMENDMENT-1

**No. PIWT-22/DEV-II/2007, Dated: 1st September 2007**

**Sub:** Modification of calendar of Events.

**Ref:** This Office invitation for Qualification Reference No.PIWT-22/DEV-II/2007 dated: 20.08.2007.

This calendar of Events of the Invitation for Qualification (RFQ) issued vide this office Notification N.PIWT-22/DEV-II/2007 Dated: 20.08.2007 for **DEVELOPMENT OF MODERN DEEP SEA PORT AT KARWAR ON THE COASTLINE OF KARNATAKA MARITIME STATE on Build, Own, Operate and Transfer (BOOT) basis stands modified as notified hereunder.**

| Sl. No. | Schedule of Process | As Existing | As Amended |
|---|---|---|---|
| 1. | Sale of REQ Document | 27.08.2007 to 1.10.2007 | 27.08.2007 to 10.09.2007 |
| 2. | Last date for receiving queries regarding RFQ | 15.10.2007 | 20.09.2007 |
| 3. | Pre-Application conference | 18.10.207 | 21.09.2007 |
| 4. | Last date of submission of Applications | 31.10.2007 | 29.09.2007 |

All other Terms and Conditions and other particulars remain unaltered.

DIRECTOR OF PORTS & INLAND WATER TRANSPORT KARWAR.

P.R. 1165

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ

**ಸಂಖ್ಯೆ:ಎ3-ಸಿಓಎಸ್-ಸಿಆರ್-11/2007-08, ದಿನಾಂಕ: 25ನೇ ಆಗಸ್ಟ್ 2007**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಕೆಳಕಂಡ ವಾಹನವನ್ನು ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯ, ಉಂಬ್ಳೇಬೈಲು ರವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್-71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯ, ಉಂಬ್ಳೇಬೈಲು ಅರಣ್ಯ ಮೊಕದ್ದಮೆ ಸಂ:86/07-08 ದಿನಾಂಕ:16.8.2007 | ಹಿರೋಹೊಂಡಾ ಬೈಕ್ ಸಿಡಿ 100 ಸಂ: ಕೆಎ-14-ಎಲ್-2556 | ಇಂಜಿನ್ ನಂ. 00ಬಿ1ಓಇ 02435 | |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**

ಪಿ.ಆರ್. 1168

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

## ಸಾರಿಗೆ ಇಲಾಖೆ

### ತಿದ್ದುಪಡಿ

**ಸಂಖ್ಯೆ:ಸಾರಿಇ 160 ಸಾಇಸೇ 2005, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007**

ಸರ್ಕಾರದ ಅಧಿಸೂಚನೆ ಸಂ:ಸಾರಿಇ 160 ಸಾಇಸೇ 2005, ದಿನಾಂಕ:10.11.2006 ರಲ್ಲಿನ 2ನೇ ಕಂಡಿಕೆಯ 2ನೇ ಸಾಲಿನಲ್ಲಿರುವ "ತಕ್ಷಣದಿಂದ" ಎಂಬ ಪದದ ಬದಲು "ದಿನಾಂಕ:27.06.2005 ರಿಂದ" ಎಂಬುದನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1169

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಪಸಂಮೀ 97 ಮೀಇಇ 2007, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2007**

ಕರ್ನಾಟಕ ಒಳನಾಡು ಮೀನುಗಾರಿಕೆ (ಸಂರಕ್ಷಣೆ, ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ 1996ರ ನಿಯಮ 7(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಮತ್ತೂರು-ಹೊಸಹಳ್ಳಿ ಮಧ್ಯ ಹರಿಯುವ ತುಂಗಾ ನದಿಯ ಭಾಗದಲ್ಲಿನ ಅಪರೂಪದ ಹಾಗೂ ಅಳಿವಿನ ಅಂಚಿನಲ್ಲಿರುವ ಮಹಶೀರ್ ಮುಂತಾದ ಮೀನುಗಳ ಸಂರಕ್ಷಣೆಯ ದೃಷ್ಟಿಯಿಂದ ಈ ಕೆಳಕಂಡ ಗ್ರಾಮಗಳ ಸರ್ವೆ ನಂಬರುಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶವನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ 'ಮತ್ತೂರು ಮತ್ಸ್ಯಧಾಮ' ವೆಂದು ಘೋಷಿಸಿದೆ.

| ಗ್ರಾಮ | ಎಡದಂಡೆ ಸರ್ವೆ ನಂಬರುಗಳು | ಉದ್ದ |
|---|---|---|
| ಹೊಸಹಳ್ಳಿ | 5, 6, 9, 13, 14, 16, 30, 31, 32 ಹೊನ್ನಾಪುರ ಗಡಿವರೆಗೆ | 1.5 ಕಿ.ಮೀ. |
| ಗ್ರಾಮ | 368, 367, 365, 364, 363, 358, 353, 352, 351, ಹರಕೆರೆ ಗಡಿವರೆಗೆ | 1.5 ಕಿ.ಮೀ. |

| | ಬಲದಂಡೆ ಸರ್ವೆ ನಂಬರುಗಳು | |
|---|---|---|
| ಮತ್ತೂರು ಗ್ರಾಮ | 1203, 1202, 1201, 1200, 1199, 1198, 1197, ಸಿದ್ದರಹಳ್ಳಿ ಗಡಿವರೆಗೆ | 1.5 ಕಿ.ಮೀ. |
| | 21, 3, 26, 23, 22, 31, 35, 36, 39, 40, 86, 37, 109, 110, 111, 130, ಮಳಲಕೊಪ್ಪ ಗ್ರಾಮದ ಗಡಿಯವರೆಗೆ | 1.5 ಕಿ.ಮೀ. |

ಕರ್ನಾಟಕ ಒಳನಾಡು ಮೀನುಗಾರಿಕೆ (ಸಂರಕ್ಷಣೆ, ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ 1996ರ ನಿಯಮ 7(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಮತ್ತೂರು-ಹೊಸಹಳ್ಳಿ ಗ್ರಾಮಗಳ ಮಧ್ಯೆ ಮೇಲೆ ತಿಳಿಸಿದ ಸರ್ವೆ ನಂಬರುಗಳ ವ್ಯಾಪ್ತಿಯಲ್ಲಿ ಹರಿಯುವ ತುಂಗಾ ನದಿಯ ಭಾಗವನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಯಾವುದೇ ತರಹದ ಮೀನುಗಾರಿಕೆ ಚಟುವಟಿಕೆಯನ್ನು ನಿಷೇಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಂ. ರಾಜಣ್ಣ**

ಪಿ.ಆರ್. 1171

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ,**
**ಉಪ ವಿಭಾಗ-2, ಬಿಜಾಪೂರ ಜಿಲ್ಲೆ : ಬಿಜಾಪೂರ.**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್-90, :2007, ದಿನಾಂಕ: 20ನೇ ಆಗಸ್ಟ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶರಣಪ್ಪ ತಂದೆ ಚನ್ನಪ್ಪ ಸೂಳಿಭಾಳಿ ಶ್ರೀಮತಿ ನೀಲಮ್ಮ ಶರಣಪ್ಪ ಸೂಳಿಭಾವಿ ಸಾ: ಬಸವನ ಬಾಗೇವಾಡಿ, ಜಿಲ್ಲೆ:ಬಿಜಾಪೂರ.

1. ಶ್ರೀ ಶಂಕರ ತಂದೆ ಶಿವಪ್ಪ ಚಿಂಚೋಳಿ, ಸಾ:ಗಣೇಶ ನಗರ, ಬಿ.ಬಾಗೇವಾಡಿ ಜಿಲ್ಲೆ:ಬಿಜಾಪೂರ.
2. ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಿಜಾಪೂರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಶಂಕರಪ್ಪ ಶರಣಪ್ಪ ಸೂಳಿಭಾವಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 6.6.07 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾರೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1173

ಕಾರ್ಮಿಕ ಪರಿಹಾರ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಉಪವಿಭಾಗ-2, ಬಿಜಾಪೂರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1,**
**ಕಾರ್ಮಿಕ ಭವನ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಸಂಖ್ಯೆ:ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-29/2007, ದಿನಾಂಕ: 4ನೇ ಸೆಪ್ಟೆಂಬರ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶ್ರೀ ರಾಜಾಂಗಂ, ವಯಸ್ಸು, 55 ವರ್ಷ ತಂದೆ: ಲೇಟ್ ಶ್ರೀ ಆದಿ ಮೂಲಂ ವಾಸ: ಮೇಲ್ಮಪಟ್ಟು ಅಂಚೆ, ಪರ್ನುತ್ ತಾಲ್ಲೂಕು, ಕಡಲೂರು ಜಿಲ್ಲೆ, ತಮಿಳುನಾಡು.

1. ಮೆ|| ಫಾಜಲ್ ಟ್ರೇಡರ್ಸ್ ನ.2, 8ನೇ ಮುಖ್ಯರಸ್ತೆ, ಶ್ಯಾಮಣ್ಣ ಗಾರ್ಡನ್, ಫೈವ್ ಲೈನ್ ಹತ್ತಿರ, ಮಸೀದಿ, ಬೆಂಗಳೂರು-560 026
2. ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್: ಡಿಪಿ-6 ಶ್ರೀನಿವಾಸ ಮೇನಷನ್, 3ನೇ ಬ್ಲಾಕ್, ಜಯನಗರ, ಬೆಂಗಳೂರು-11.

**ಪ್ರಕಟಣೆ**

ಈ ಮೇಲೆ ನಮೂದಿಸಿರುವ ಅರ್ಜಿದಾರರು ತಾವು ಮೃತ ಶ್ರೀ ಆರ್. ಪ್ರಭು ಇವರ ಅವಲಂಬಿತರೆಂದು, ಮೃತನು 1ನೇ ಪ್ರತಿವಾದಿ ಗ್ಯಾಸ್ ಕಟ್ಟರ್ ಕೆಲಸ ಮಾಡುವಾಗ, ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ: 12.3.2005 ಮರಣ ಹೊಂದಿರುತ್ತಾರೆ ಎಂದು, ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ ಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹಾ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1174 ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-1, ಬೆಂಗಳೂರು.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ತಿದ್ದುಪಡಿ ಅಧಿಸೂಚನೆ**

**ನಂ.ತಾಂತ್ರಿಕ(1).ಚಿ.ಜೋ.ಗ್ರಾಮಠಾಣ.ನಮಾ.24:2005-06, ದಿನಾಂಕ: 7ನೇ ಆಗಸ್ಟ್ 2007**

ಕರ್ನಾಟಕ ಭೂಕಂದಾಯ ಅಧಿನಿಯಮ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ.ಕಂ ಇ.134,ಭೂದಾಸ.2005 ಬೆಂಗಳೂರು, ದಿನಾಂಕ:28.11.2006ರ ಮೇರೆಗೆ ನಿರ್ದೇಶಿಸಿದಂತೆ, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಚಿಕ್ಕಜೋಗಿಹಳ್ಳಿ ಗ್ರಾಮಠಾಣ ವ್ಯಾಪ್ತಿಯಲ್ಲಿ ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಸಂಬಂಧಪಟ್ಟಂತೆ ಈ ಕಛೇರಿಯ ಅಧಿಸೂಚನೆ ದಿನಾಂಕ: 23.12.2006ನ್ನು ಕರ್ನಾಟಕ ರಾಜ್ಯಪತ್ರದ ದಿನಾಂಕ:4.1.2007ರ ಭಾಗ-3ರ ಪುಟ ಸಂಖ್ಯೆ:47 ರಲ್ಲಿ ಪ್ರಕಟಿಸಲಾಗಿದೆ. ಸದರಿ ಅಧಿಸೂಚನೆಯಲ್ಲಿ ಕೆಳಕಂಡ ತಪಶೀಲಿನಲ್ಲಿ ನಮೂದಿಸಿರುವಂತೆ ತಿದ್ದುಪಡಿ ಮಾಡಲಾಗಿದೆ.

**ಅನುಸೂಚಿ**

ಚಿಕ್ಕಜೋಗಿಹಳ್ಳಿ ಗ್ರಾಮಠಾಣ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ಪರಿಷ್ಕೃತ ತಃಖ್ತೆ.

**ಜಿಲ್ಲೆ:**ಶಿವಮೊಗ್ಗ **ತಾಲ್ಲೂಕು:**ಶಿಕಾರಿಪುರ **ಹೋಬಳಿ:**ಅಂಜನಾಪುರ **ಗ್ರಾಮ:**ಚಿಕ್ಕಜೋಗಿಹಳ್ಳಿ

| ಕ್ರ. ಸಂ. | ದಿನಾಂಕ: 23.12.2006ರ ಅಧಿಸೂಚನೆಯಂತೆ ಪ್ರಕಟಣೆಗೊಂಡ ಸರ್ವೆ ನಂಬರುಗಳ ವಿವರ | | ತಿದ್ದುಪಡಿಯಾಗಿರುವುದು | | ಷರಾ |
|---|---|---|---|---|---|
| | ಸ.ನಂ. | ಎ-ಗುಂ | ಸ.ನಂ. | ಎ-ಗುಂ | |
| 1 | 6 | 9-17 | 6:7 | 3-19 | |
| 2 | 8 | 4-30 | 8 | 4-30 | ಹಿಂದಿನ ಅಧಿಸೂಚನೆಯಂತೆ ಖಾಯಂ |
| 3 | 9 | 8-06 | 9 | 8-06 | - ಅದೇ - |
| 4 | 10 | 5-27 | 10 | 5-27 | - ಅದೇ - |
| 5 | 11 | 10-11 | 11ರ ಪೈಕಿ | 4-16 | |
| 6 | 12 | 8-23 | - ಕೈಬಿಟ್ಟಿದೆ - | | |
| 7 | 13 | 8-10 | 13:1 | 1-19 | |
| 8 | 48 | 9-17 | 48ರ ಪೈಕಿ | 7-29 | |
| 9 | 49 | 15-06 | - ಕೈಬಿಟ್ಟಿದೆ - | | |
| 10 | 52 | 8-35 | 52:1 | 2-26 | |
| 11 | 53 | 3-17 | 53 | 3-17 | ಹಿಂದಿನ ಅಧಿಸೂಚನೆಯಂತೆ |
| 12 | 54 | 8-14 | 54 | 8-14 | - ಅದೇ - |
| 13 | 55 | 7-12 | 55 | 7-12 | - ಅದೇ - |
| 14 | 56 | 2-26 | 56 | 2-26 | - ಅದೇ - |
| 15 | 57 | 7-34 | 57 | 7-34 | - ಅದೇ - |

| ಕ್ರ. ಸಂ. | ದಿನಾಂಕ: 23.12.2006ರ ಅಧಿಸೂಚನೆಯಂತೆ ಪ್ರಕಟಣೆಗೊಂಡ ಸರ್ವೆ ನಂಬರುಗಳ ವಿವರ | | ತಿದ್ದುಪಡಿಯಾಗಿರುವುದು | | ಷರಾ |
|---|---|---|---|---|---|
| 16 | 59 | 20-30 | 59:1ಎ ಪೈಕಿ | 6-05 | |
| 17 | ಗ್ರಾಮಠಾಣ | 8-38 | ಗ್ರಾಮಠಾಣ | 8-38 | |
| | **ಒಟ್ಟು** | **147-33** | | **82-38** | |

ಭೂದಾಖಲೆಗಳ ಜಂಟಿ ನಿರ್ದೇಶಕರು,

ಪಿ.ಆರ್. 1175 ನಗರ ಮಾಪನ, ದಕ್ಷಿಣ ವಲಯ, ಮೈಸೂರು.

## ಪೊಲೀಸ್ ಇಲಾಖೆ

## ಪೊಲೀಸ್ ಆಯುಕ್ತರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:12/ಡಿಸಿಪಿ/ಸಂ.ಪೂ/2007, ದಿನಾಂಕ: 16ನೇ ಆಗಸ್ಟ್ 2007**

ಬೆಂಗಳೂರು ನಗರ - ಅಶೋಕನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ವಿಕ್ಟೋರಿಯಾ ರಸ್ತೆ-ಪಾಮ್‌ಗ್ರೂವ್ ಜಂಕ್ಷನ್‌ನಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯವರು ಮೋರಿ ಕಾಮಗಾರಿ ಕೆಲಸ ಕೈಗೊಂಡಿರುವುದರಿಂದ ಇಲ್ಲಿನ ಸಂಚಾರವನ್ನು ತಾತ್ಕಾಲಿಕವಾಗಿ ನಿರ್ಬಂಧಿಸಿ ಮೋರಿ ಕಾಮಗಾರಿ ಕೆಲಸಕ್ಕೆ ಯಾವುದೇ ಧಕ್ಕೆಯಾಗದಂತೆ ನೋಡಿಕೊಳ್ಳಲು ಹಾಗೂ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಯಾವುದೇ ಧಕ್ಕೆಯಾಗದಂತೆ ಸಂಚಾರಕ್ಕೆ ಪರ್ಯಾಯ ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಆದೇಶಿಸಿರುತ್ತೇನೆ.

1. ವಿಮಾನ ನಿಲ್ದಾಣದ ಕಡೆಯಿಂದ ಬಂದಂತಹ ಬಾರೀ ವಾಹನಗಳು, ಬಿ.ಎಂ.ಟಿ.ಸಿ ಬಸ್ಸುಗಳು, ಲಘು ಸರಕು ವಾಹನಗಳು ಎ.ಎಸ್.ಸಿ ಯಿಂದ ಬಲ ತಿರುವು ಪಡೆದು ಆರ್.ಎಂ. ರಸ್ತೆ ಜಂಕ್ಷನ್‌ಗೆ ಸೇರಿ ಅಲ್ಲಿ ಎಡ ತಿರುವು ಪಡೆದುಕೊಂಡು ಹಾಸ್ಮೆಲ್ ಜಂಕ್ಷನ್ ಮೂಲಕ ಡಿಸೋಜ ವೃತ್ತಕ್ಕೆ ಬಂದು ರಿಚ್‌ಮಂಡ್ ರಸ್ತೆಯಲ್ಲಿ ಚಲಿಸಲು ಅವಕಾಶ ಕಲ್ಪಿಸಿದೆ.
2. ವಿಮಾನ ನಿಲ್ದಾಣದಿಂದ ಬಂದಂತಹ ಲಘು ಮೋಟಾರು ವಾಹನಗಳು, ದ್ವಿಚಕ್ರ ವಾಹನಗಳು ಎ.ಎಸ್.ಸಿ ಯಿಂದ ಇಂಡಿಯಾ ಗ್ಯಾರೇಜ್‌ಗೆ ಬಂದು ಇಂಡಿಯಾ ಗ್ಯಾರೇಜ್ ಜಂಕ್ಷನ್ ಮೂಲಕ ಹಾಯ್ದು ಪಾಮ್‌ಗ್ರೂವ್ ಜಂಕ್ಷನ್‌ನಲ್ಲಿ ಎಡತಿರುವು ಪಡೆದುಕೊಂಡು ಪಾಮ್‌ಗ್ರೂವ್ ರಸ್ತೆ ಮೂಲಕ ಸಾಗಿ ಅಂಬೇಡ್ಕರ್ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ಓ.ಆರ್.ಸಿ ರಸ್ತೆ ಮೂಲಕ ಮದರ್ ತೆರೇಸಾ ರಸ್ತೆ ಮಾರ್ಗವಾಗಿ ರಿಚ್‌ಮಂಡ್ ರಸ್ತೆಗೆ ಸೇರಲು ಅವಕಾಶ ಕಲ್ಪಿಸಿದೆ.
3. ಆಸ್ಟಿನ್‌ಟೌನ್ ಅಂಬೇಡ್ಕರ್ ಜಂಕ್ಷನ್‌ನಿಂದ ಮದರ್ ತೆರೇಸಾ ರಸ್ತೆ ವರೆವಿಗೂ ಪಶ್ಚಿಮ ದಿಕ್ಕಿನಲ್ಲಿ ಮಾತ್ರ ವಾಹನಗಳು ಚಲಿಸ ಬಹುದಾಗಿರುತ್ತೆ.
4. ಮದರ್ ತೆರೇಸಾ ರಸ್ತೆ ಮೂಲಕ ಬಂದಂತಹ ವಾಹನಗಳು ಓ.ಆರ್.ಸಿ ರಸ್ತೆ ಜಂಕ್ಷನ್‌ಗೆ ಬಂದು ನೀಲಸಂದ್ರ ಮುಖ್ಯ ರಸ್ತೆಯಲ್ಲಿ ಸಾಗಿ ವಾಟರ್ ಟ್ಯಾಂಕ್ ತಲುಪಿ ಎಡ ತಿರುವು ಪಡೆದು ದೇವರಾಜು ಅರಸು ರಸ್ತೆ ಮೂಲಕ ಚಲಿಸಿ ಆಸ್ಟಿನ್‌ಟೌನ್ ಅಂಬೇಡ್ಕರ್ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು, ಎಡತಿರುವು ಮುಕ್ತವಾಗಿದ್ದು, ಬಲಕ್ಕೆ ತಿರುಗಿ ಓ.ಆರ್.ಸಿ. ರಸ್ತೆ ಮೂಲಕ ಚಲಿಸಿ ಲೋಯರ್ ಅಗರಂ ರಸ್ತೆ ಸೇರಲು ಅನುವು ಮಾಡಿಕೊಡಲಾಗಿದೆ.
5. ಆಸ್ಟಿನ್‌ಟೌನ್ ಅಂಬೇಡ್ಕರ್ ಜಂಕ್ಷನ್ ಮೂಲಕ ಜಸ್ಮಾ ಮಂದಿರ ಕೂಡು ರಸ್ತೆಗೆ ಹೋಗುವಂತಹ ವಾಹನಗಳು ಆಸ್ಟಿನ್‌ಟೌನ್ ಅಂಬೇಡ್ಕರ್ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ನೀಲಸಂದ್ರ ಮುಖ್ಯರಸ್ತೆ ಸೇರಿ ವಾಟರ್ ಟ್ಯಾಂಕ್ ಜಂಕ್ಷನ್ ಮೂಲಕ ಆಸ್ಟಿನ್‌ಟೌನ್ ಬಿ.ಡಿ.ಎ. ಕಾಂಪ್ಲೆಕ್ಸ್ ಮತ್ತು ಇತರೆ ಕಡೆಗಳಿಗೆ ಚಲಿಸಲು ಅನುವು ಮಾಡಿಕೊಡಲಾಗಿದೆ.
6. ಆಸ್ಟಿನ್‌ಟೌನ್ ಬಿ.ಡಿ.ಇ. ಕಾಂಪ್ಲೆಕ್ಸ್ ಕಡೆಯಿಂದ ಬರುವಂತಹ ವಾಹನಗಳು ಜಸ್ಮಾ ಮಂದಿರ ವೃತ್ತದಲ್ಲಿ ಬಲ ತಿರುವು ಪಡೆದು ಸಂಚರಿಸಲು ಅನುವು ಮಾಡಿಕೊಡಲಾಗಿದೆ.
7. ಲೋಯರ್ ಅಗರಂ ರಸ್ತೆಯಿಂದ ಅಂಬೇಡ್ಕರ್ ಜಂಕ್ಷನ್‌ವರೆಗೆ ಬಂದು ಅಲ್ಲಿ ಬಲ ತಿರುವು ಪಡೆಯುವಂತಹ ವಾಹನಗಳು ವಿಕ್ಟೋರಿಯಾ ಲೇಔಟ್‌ಗೆ ಮಾತ್ರ ಸೇರಬಹುದು.
8. ಆನೇಪಾಳ್ಯದಿಂದ ಬಂದಂತಹ ವಾಹನಗಳು ನೀಲಸಂದ್ರ ಮುಖ್ಯ ರಸ್ತೆಯಲ್ಲಿ ವಾಟರ್‌ಟ್ಯಾಂಕ್ ಜಂಕ್ಷನ್‌ವರೆಗೆ ಬಂದು ಅಲ್ಲಿ ಬಲತಿರುವು ಪಡೆದು ಜಸ್ಮಾ ಮಂದಿರದ ಹತ್ತಿರ ಎಡತಿರುವು ಪಡೆದು ಅಂಬೇಡ್ಕರ್ ಜಂಕ್ಷನ್ ಮೂಲಕ ಮದರ್ ತೆರೇಸಾ ರಸ್ತೆಗೆ ಚಲಿಸಲು ಅನುವು ಮಾಡಿಕೊಡಲಾಗಿದೆ. (ವಾಟರ್ ಟ್ಯಾಂಕ್ ಜಂಕ್ಷನ್‌ನಿಂದ ನೀಲಸಂದ್ರ ಮುಖ್ಯರಸ್ತೆ ಓಆರ್‌ಸಿ ರಸ್ತೆ ಜಂಕ್ಷನ್‌ವರೆಗೆಏಕಮುಖ ರಸ್ತೆಯಾಗಿರುತ್ತದೆ)
9. ಓ.ಆರ್.ಸಿ ರಸ್ತೆಯಿಂದ ಬಂದಂತಹ ವಾಹನಗಳು ಅಂಬೇಡ್ಕರ್ ಜಂಕ್ಷನ್‌ನಲ್ಲಿ ಬಲತಿರುವು ಪಡೆದು ಪಾಮ್‌ಗ್ರೂವ್ ಜಂಕ್ಷನ್‌ನಲ್ಲಿ ರಿಚ್‌ಮಂಡ್ ರಸ್ತೆಗೆ ಬಲ ತಿರುವು ಪಡೆಯುವುದನ್ನು ನಿರ್ಬಂಧಿಸಲಾಗಿದೆ. ಕಾರಣ ಮೋರಿ ಕಾಮಗಾರಿ ಕೆಲಸದ ನಿಮಿತ್ತ ರಸ್ತೆಯನ್ನು ಮುಚ್ಚಿರುತ್ತದೆ.

10.ಹೊಸೂರು ಲಷ್ಕರ್ ರಸ್ತೆ ಮೂಲಕ ಬಂದು ಕ್ಯಾಂಬೆಲ್ ಜಂಕ್ಷನ್‌ಗೆ ಸೇರಿ ಮದರ್ ತೆರೇಸಾ ರಸ್ತೆ ಮೂಲಕ ಚಲಿಸಿ ಓ.ಆರ್.ಸಿ. ರಸ್ತೆಗೆ ಎಡತಿರುವು ಇರುವುದಿಲ್ಲ. ಈ ವಾಹನಗಳು ನೀಲಸಂದ್ರ ಮುಖ್ಯರಸ್ತೆಯಲ್ಲಿ ಮುಂದುವರೆದು ವಾಟರ್ ಟ್ಯಾಂಕ್ ಜಂಕ್ಷನ್ ಹತ್ತಿರ ಎಡ ತಿರುವು ಪಡೆದು ಚಲಿಸಬಹುದಾಗಿರುತ್ತದೆ. (ಅಂಬೇಡ್ಕರ್ ಜಂಕ್ಷನ್‌ನಿಂದ ನೀಲಸಂದ್ರ, ಓ.ಆರ್.ಸಿ. ರಸ್ತೆ ಜಂಕ್ಷನ್, ಮದರ್ ತೆರೇಸಾ ರಸ್ತೆ ಕೂಡುವ ರಸ್ತೆ ಪಶ್ಚಿಮ ದಿಕ್ಕಿಗೆ ಏಕಮುಖ ಸಂಚಾರ ವ್ಯವಸ್ಥೆ ಮಾಡಲಾಗಿದೆ)

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 03.09.2007 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 16.08.2007 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1176 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಇಲಾಖೆ

## ಪೊಲೀಸ್ ಆಯುಕ್ತರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:13/ಡಿಸಿಪಿ/ಸಂ.ಪೂ/2007, ದಿನಾಂಕ: 18ನೇ ಆಗಸ್ಟ್ 2007**

ಬೆಂಗಳೂರು ನಗರ ಇಂದಿರಾನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ಜೀವನ್ ಭೀಮಾನಗರ (ಜೆ.ಬಿ. ನಗರ) ಮುಖ್ಯ ರಸ್ತೆಯ 6ನೇ ಕ್ರಾಸ್ ಜಂಕ್ಷನ್‌ನಿಂದ ಏರ್‌ಪೋರ್ಟ್ ರಸ್ತೆ ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ವರೆಗೆ ಇದ್ದಂತ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ಈ ಹಿಂದೆ ಅಧಿಸೂಚನೆ ಸಂಖ್ಯೆ. 16/ಸಂವಿ/ಸಿಓಪಿ/2005 ದಿನಾಂಕ: 21.09.2005 ರಲ್ಲಿ ಏಕಮುಖ ಸಂಚಾರ ರಸ್ತೆಯನ್ನಾಗಿ ಮಾರ್ಪಡಿಸಿ ಅಂದರೆ ಜೀವನ್ ಭೀಮಾನಗರ ನಗರ 6ನೇ ಕ್ರಾಸ್ ರಸ್ತೆಯಲ್ಲಿ ಏರ್‌ಪೋರ್ಟ್ ರಸ್ತೆ ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ನಿಂದ ಜೀವನ್ ಭೀಮಾನಗರ 6ನೇ ಕ್ರಾಸ್ ರಸ್ತೆಯಲ್ಲಿನ 15ನೇ ಮುಖ್ಯರಸ್ತೆ ಜಂಕ್ಷನ್ ಕಡೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಜೀವನ್ ಭೀಮಾನಗರ 6ನೇ ಕ್ರಾಸ್ ರಸ್ತೆಯ 15ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ ಏರ್‌ಪೋರ್ಟ್ ರಸ್ತೆ ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿತ್ತು.

ಇತ್ತೀಚೆಗೆ ಏರ್‌ಪೋರ್ಟ್ ರಸ್ತೆ ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ನಲ್ಲಿದ್ದ ಸೆಂಟರ್ ಮೀಡಿಯನ್ ಅನ್ನು ಸಾರ್ವಜನಿಕ ಸುಗಮ ಸಂಚಾರದ ದೃಷ್ಟಿಯಿಂದ ಮುಚ್ಚಲಾಗಿದ್ದು ಇದರಿಂದಾಗಿ ಏರ್‌ಪೋರ್ಟ್ ರಸ್ತೆಯಿಂದ ಜೆಬಿ.ನಗರದ ಕಡೆಗೆ ಬರುವಂತಹ ಸಂಚಾರವು ಕಡಿಮೆಯಾಗಿರುತ್ತದೆ. ಜೆ.ಬಿ. ನಗರ ಮುಖ್ಯ ರಸ್ತೆಯಲ್ಲಿ ಇತ್ತೀಚೆಗೆ ವಾಹನ ದಟ್ಟಣೆ ಅಧಿಕಗೊಂಡಿದ್ದು 6ನೇ ಕ್ರಾಸ್ ರಸ್ತೆಯಲ್ಲಿ 15ನೇ ಮುಖ್ಯರಸ್ತೆ ಜಂಕ್ಷನ್‌ನಿಂದ ಏರ್‌ಪೋರ್ಟ್ ರಸ್ತೆಗೆ ವಾಹನ ಸಂಚಾರವನ್ನು ನಿಷೇಧಿಸಿದ್ದ ಪ್ರಯುಕ್ತ ಜೆ.ಬಿ. ನಗರ ಮುಖ್ಯ ರಸ್ತೆಯಲ್ಲಿ 6ನೇ ಕ್ರಾಸ್ ನಲ್ಲಿ ತಿರುವು ಪಡೆದುಕೊಂಡು ಏರ್‌ಪೋರ್ಟ್ ರಸ್ತೆ ಕಡೆಗೆ ಸಾಗುತ್ತಿದ್ದ ಸಂಚಾರವು ಜೆ.ಬಿ. ನಗರ ಮುಖ್ಯರಸ್ತೆಯಲ್ಲಿ ಪೂರ್ವ-ಪಶ್ಚಿಮವಾಗಿ ಸಾಗಿ ಇಂದಿರಾನಗರ 100 ಅಡಿ ರಸ್ತೆ ಮತ್ತು ಸುರಂಜನ್ ದಾಸ್ ರಸ್ತೆಗಳ ಮೂಲಕ ಏರ್‌ಪೋರ್ಟ್ ರಸ್ತೆಗೆ ಸೇರುತ್ತಿದ್ದು ಇದರಿಂದ ಜೆ.ಬಿ. ನಗರ ಮುಖ್ಯರಸ್ತೆ, ಇಂದಿರಾನಗರ 100 ಅಡಿ ರಸ್ತೆ ಮತ್ತು ಸುರಂಜನ್ ದಾಸ್ ರಸ್ತೆಗಳಲ್ಲಿ ಸುಗಮ ಸಂಚಾರದ ಮೇಲೆ ತೀವ್ರ ಪರಿಣಾಮ ಬೀರುತ್ತಿದ್ದುದನ್ನು ಮನಗಂಡು ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಈ ಹಿಂದೆ ಮೇಲ್ಕಂಡ ಅಧಿಸೂಚನೆಯಲ್ಲಿ ಹೊರಡಿಸಲಾಗಿದ್ದ ಏಕಮುಖ ಸಂಚಾರ ವ್ಯವಸ್ಥೆಯನ್ನು ದ್ವಿಮುಖ ಸಂಚಾರ ವ್ಯವಸ್ಥೆಗೆ ಮಾರ್ಪಡಿಸುವುದು ಹಾಗೂ ಜೆ.ಬಿ. ನಗರ ಮುಖ್ಯರಸ್ತೆ 6ನೇ ಕ್ರಾಸ್ ಜಂಕ್ಷನ್‌ನಿಂದ ಕೋಡಿಹಳ್ಳಿ: ಐ.ಎಸ್.ಆರ್.ಓ. ರಸ್ತೆ ವರೆವಿಗೂ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಆದೇಶಿಸಿರುತ್ತೇನೆ.

1. ಜೀವನ್ ಭೀಮಾನಗರ 6ನೇ ಕ್ರಾಸ್ ರಸ್ತೆಯಲ್ಲಿ ಏರ್‌ಪೋರ್ಟ್ ರಸ್ತೆ ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ನಿಂದ ಜೀವನ್ ಭೀಮಾನಗರ 6ನೇ ಕ್ರಾಸ್ ರಸ್ತೆಯಲ್ಲಿನ 15ನೇ ಮುಖ್ಯರಸ್ತೆ ಜಂಕ್ಷನ್ ವರೆಗೆ ಜಾರಿಗೆ ತರಲಾಗಿದ್ದ ಏಕಮುಖ ಸಂಚಾರ ವ್ಯವಸ್ಥೆಯನ್ನು ಮಾರ್ಪಡಿಸಿ ದ್ವಿಮುಖ ಸಂಚಾರ ವ್ಯವಸ್ಥೆಗೆ ಅನುವು ಮಾಡಿಕೊಡಲಾಗಿದೆ.
2. ಜೀವನ್ ಭೀಮಾನಗರ ಮುಖ್ಯ ರಸ್ತೆಯಲ್ಲಿ 6ನೇ ಕ್ರಾಸ್ ರಸ್ತೆ ಜಂಕ್ಷನ್‌ನಿಂದ ಕೋಡಿಹಳ್ಳಿ ಐ.ಎಸ್.ಆರ್.ಓ. ರಸ್ತೆ ವರೆವಿಗೂ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು ಈ ವ್ಯವಸ್ಥೆಯಲ್ಲಿ ಜೆ.ಬಿ. ನಗರ ಮುಖ್ಯ ರಸ್ತೆ 6ನೇ ಕ್ರಾಸ್ ಜಂಕ್ಷನ್‌ನಿಂದ ಕೋಡಿಹಳ್ಳಿ ಐ.ಎಸ್.ಆರ್.ಓ. ರಸ್ತೆ ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಕೋಡಿಹಳ್ಳಿ ಐ.ಎಸ್.ಆರ್.ಓ ರಸ್ತೆ ಜಂಕ್ಷನ್‌ನಿಂದ ಜೆ.ಬಿ. ನಗರ ಮುಖ್ಯರಸ್ತೆ 6ನೇ ಕ್ರಾಸ್ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಿದೆ. ನಿಷೇಧಿಸಲಾದ ಈ

